# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೯, ೨೦೧೫ (ಆಷಾಢ ೧೮, ಶಕ ವರ್ಷ ೧೯೩೭)<br>Bengaluru, Thursday, July 9, 2015 (Ashadha 18, Shaka Varsha 1937) | ಸಂಚಿಕೆ ೨೮<br>Issue 28 |
|---|---|---|

## ಭಾಗ ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಛ ನ್ಯಾಯಾಲಯದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಆಕುಕ 188 ಪಿಐಎಂ 2015, ಬೆಂಗಳೂರು, ದಿನಾಂಕ : 20-05-2015.**

ಡಾ॥ ಹರ್ಷಪುತ್ರಾಯ ಎನ್. ವೈದ್ಯಾಧಿಕಾರಿ, ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಅಮರಗೋಳ, ಧಾರವಾಡ, ಇವರಿಗೆ ವೈದ್ಯರು ದರ್ಜೆ-3 ಹುದ್ದೆಗೆ ನೇಮಕಗೊಳಿಸಿದ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 3 ಪಿಐಎಂ 96, ದಿನಾಂಕ : 08-05-1996 ರಲ್ಲಿ ಮತ್ತು ಇವರಿಗೆ ಖಾಯಂಪೂರ್ವ ಅವಧಿಯನ್ನು ಘೋಷಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 358 ಪಿಐಎಂ 99, ದಿನಾಂಕ : 08-10-1999ರಲ್ಲಿ **ಡಾ॥ ಹರ್ಷಪುತ್ರಯ್ಯ ಎನ್**. ಎಂಬುದರ ಬದಲು **ಡಾ॥ ಹರ್ಷಪುತ್ರಾಯ ಎನ್**. ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾ.ವೈ.ಪ. ಮತ್ತು ಸಮನ್ವಯ).

PR-604

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 490 ಸಲುಸೇ 2014, ಬೆಂಗಳೂರು, ದಿನಾಂಕ : 22-05-2015.**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಆಪ್ತ ಕಾರ್ಯದರ್ಶಿ (ಗ್ರೇಡ್-2) ವೃಂದದ ಈ ಕೆಳಕಂಡ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 40050-1050-45300-1200-52500-1350-56550 ರ ವೇತನ ಶ್ರೇಣಿಯ ಆಪ್ತ ಕಾರ್ಯದರ್ಶಿ (ಗ್ರೇಡ್-1) ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 1 | ಶ್ರೀ ಡಿ.ಆರ್. ಅಶೋಕ್,<br>ಆಪ್ತ ಕಾರ್ಯದರ್ಶಿ (ಗ್ರೇಡ್-2),<br>ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ,<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಆಪ್ತ ಕಾರ್ಯದರ್ಶಿ (ಗ್ರೇಡ್-2), ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹುದ್ದೆಯನ್ನು ತಾತ್ಕಾಲಿಕವಾಗಿ ಆಪ್ತ ಕಾರ್ಯದರ್ಶಿ (ಗ್ರೇಡ್-1) ಹುದ್ದೆಯನ್ನಾಗಿ ಉನ್ನತೀಕರಿಸಿ, ಹಾಗೆ ಉನ್ನತೀಕರಿಸಿದ ಹುದ್ದೆಗೆ ನೇಮಿಸಿದೆ. |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 2 | ಶ್ರೀಮತಿ ಕೆ.ಪಿ. ವೀಣಾ,<br>ಆಪ್ತ ಕಾರ್ಯದರ್ಶಿ (ಗ್ರೇಡ್–2),<br>ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ,<br>ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಆಪ್ತ ಕಾರ್ಯದರ್ಶಿ (ಗ್ರೇಡ್–1), ಸರ್ಕಾರದ ಕಾರ್ಯದರ್ಶಿಯವರ ಆಪ್ತ ಶಾಖೆ, ವೈದ್ಯಕೀಯ ಶಿಕ್ಷಣ ಇಲಾಖೆ–ಖಾಲಿ ಹುದ್ದೆಗೆ ನೇಮಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–6).

**PR-605**

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಒಇ 278 ಪಿಪಿಇ 2015, ಬೆಂಗಳೂರು, ದಿನಾಂಕ : 29–05–2015.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 278 ಪಿಪಿಇ 2014, ದಿನಾಂಕ : 08–05–2015ರಲ್ಲಿ ಈ ಕೆಳಕಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರುಗಳಿಗೆ ಸರ್ಕಾರಿ ಅಭಿಯೋಜಕರು/ ಕಾನೂನು ಅಧಿಕಾರಿ (ಹಿರಿಯ) ಹುದ್ದೆಗೆ ಸ್ಥಾನಪನ್ನ ನೀಡಿ ತಃಖ್ತೆಯ ಅಂಕಂ (3)ರಲ್ಲಿ ನಮೂದಿಸಿರುವ ಸ್ಥಳಗಳಿಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿರುವುದನ್ನು ಭಾಗಶಃ ಮಾರ್ಪಡಿಸಿ, ತಃಖ್ತೆಯ ಅಂಕಣ (4)ರಲ್ಲಿ ನಮೂದಿಸಿರುವ ಸ್ಥಳಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು, ಪದನಾಮ ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿಯ ನಂತರ ನಿಯುಕ್ತಿಗೊಳಿಸಲಾದ ಸ್ಥಳ | ಮಾರ್ಪಡಿಸಿ ನಿಯುಕ್ತಿಗೊಳಿಸಲಾದ ಸ್ಥಳ |
|---|---|---|---|
| **1** | **2** | **3** | **4** |
| 1 | ಶ್ರೀ ಹೆಚ್.ಡಿ. ಆನಂದಕುಮಾರ್,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜರು, ಸಿಜೆಎಂ ನ್ಯಾಯಾಲಯ, ಶಿವಮೊಗ್ಗ | ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಾರವಾರ | ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು |
| 2 | ಶ್ರೀ ಅಮರೇಗೌಡ<br>ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಸರ್ಕಾರಿ ಅಭಿಯೋಜಕರು, 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು (ಪೀಠಾಸೀನ ಮಧುಗಿರಿ) | ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು |
| 3 | ಶ್ರೀಮತಿ ತನುಜಾ ಬಾಬುರಾವ್ ಹೊಸಪಟ್ಟಣ,<br>ಕಾನೂನು ಅಧಿಕಾರಿ (ಕಿರಿಯ), ಎಸ್.ಪಿ. ಕಛೇರಿ, ಕಾರವಾರ | ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು | ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಾರವಾರ ಉತ್ತರ ಕನ್ನಡ ಜಿಲ್ಲೆ |
| 4 | ಶ್ರೀ ವೀರೇಶ್ ಜಿ. ಮಾಮನಿ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆಎಂ ನ್ಯಾಯಾಲಯ, ಬಾಗಲಕೋಟೆ | ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ (ಪೀಠಾಸೀನ ಶ್ರೀರಂಗಪಟ್ಟಣ) | ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ<br>(ಶ್ರೀ ಎಸ್.ಆರ್. ದೇಸಾಯಿ, ಇವರು ದಿನಾಂಕ: 31–05–2015ರಂದು ವಯೋ ನಿವೃತ್ತಿಯಿಂದ ತೆರವಾಗುವ ಸ್ಥಳಕ್ಕೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೋಲಿಸ್ ಸೇವೆಗಳು–ಬಿ).

**PR-606**

## ಕಾನೂನು ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಲಾ 96 ಎಲ್ಎಜಿ 2012, ಬೆಂಗಳೂರು, ದಿನಾಂಕ : 23–05–2015.**

ಶ್ರೀ ಎಸ್. ಸೋಮಸುಂದರ್ ಅಪರ ಸರ್ಕಾರಿ ವಕೀಲರು, ಹಿರಿಯ ಶ್ರೇಣಿ ನ್ಯಾಯಾಲಯ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ–ಇವರ ಅಧಿಕಾರದ ಅವಧಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 5(4)ರ ಅನ್ವಯ ಗರಿಷ್ಠ ಅವಧಿ ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹುದ್ದೆಯ ಕರ್ತವ್ಯದಿಂದ ವಿಮುಕ್ತಗೊಳಿಸಿ ಸದರಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿವಿಲ್ ಪ್ರಕರಣಗಳನ್ನು ಹೆಚ್ಚುವರಿಯಾಗಿ ನಿರ್ವಹಿಸುವಂತೆ ಶ್ರೀ ಎಸ್.ಬಿ. ಶಾಂತರಾಜಯ್ಯ, ಜಿಲ್ಲಾ ಸರ್ಕಾರಿ ವಕೀಲರು ತುಮಕೂರು ಜಿಲ್ಲೆ ಇವರಿಗೆ ಸೂಚಿಸಲಾಗಿದೆ.

ಸದರಿ ಅವಧಿಯಲ್ಲಿ ಹೆಚ್ಚುವರಿಯಾಗಿ ಕಾರ್ಯನಿರ್ವಹಿಸುವ ಅವಧಿಗೆ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 15(I) (II)ರ ಅನ್ವಯ ಪ್ರಯಾಣ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಾಯೀದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2).

**PR-607**

**SC-25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 19 ಸಲುಸೇ 2015, ಬೆಂಗಳೂರು, ದಿನಾಂಕ : 21–05–2015**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಸರ್ಕಾರದ ಜಂಟಿ ಕಾರ್ಯದರ್ಶಿ ವೃಂದದ ಈ ಕೆಳಕಂಡ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 52500–1350–60600–1500–69600–1700–73000ರ ವೇತನ ಶ್ರೇಣಿಯ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ :

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 1 | ಶ್ರೀ ಕೆ. ನಾರಾಯಣ,<br>ಸರ್ಕಾರದ ಜಂಟಿ ಕಾರ್ಯದರ್ಶಿ,<br>ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ) | ಸರ್ಕಾರದ ಜಂಟಿ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ) ಹುದ್ದೆಯನ್ನು ತಾತ್ಕಾಲಿಕವಾಗಿ ಸರ್ಕಾರದ ಅಪರ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ) ಹುದ್ದೆಯನ್ನಾಗಿ ಉನ್ನತೀಕರಿಸಿ, ಹಾಗೆ ಉನ್ನತೀಕರಿಸಿದ ಹುದ್ದೆಗೆ ನೇಮಿಸಿದೆ. |
| 2 | ಶ್ರೀ ಎಂ. ವೆಂಕಟರಸಪ್ಪ,<br>ಸರ್ಕಾರದ ಜಂಟಿ ಕಾರ್ಯದರ್ಶಿ,<br>ಸಿ.ಆ.ಸು.ಇ (ಆಡಳಿತ) | ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ) ಹುದ್ದೆಯನ್ನು ತಾತ್ಕಾಲಿಕವಾಗಿ ಸರ್ಕಾರದ ಅಪರ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ) ಹುದ್ದೆಯನ್ನಾಗಿ ಉನ್ನತೀಕರಿಸಿ, ಹಾಗೆ ಉನ್ನತೀಕರಿಸಿದ ಹುದ್ದೆಗೆ ನೇಮಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–6).

**PR-608**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 289 ಪಿಪಿಇ 2013, ಬೆಂಗಳೂರು, ದಿನಾಂಕ : 14–05–2015**

ಶ್ರೀಮತಿ ಸರೋಜ ಗುರುಬಸಯ್ಯ ಕೂಡಲಗಿಮಠ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿಗ್ಗಾವಿ, ಹಾವೇರಿ ಜಿಲ್ಲೆ ಇವರಿಗೆ ಸರ್ಕಾರದ ಆದೇಶ ಸಂಖ್ಯೆ : ಒಇ 289 ಪಿಪಿಇ 2013, ದಿನಾಂಕ : 03–03–2015ರಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅಧಿಕ ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಇಲ್ಲಿ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿರುವುದನ್ನು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮಾರ್ಪಡಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 289 ಪಿಪಿಇ 2013, ದಿನಾಂಕ : 05–05–2015ರಲ್ಲಿ 28ನೇ ಅಧಿಕ ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿರುವುದನ್ನು ಸಹ ರದ್ದುಪಡಿಸಿ, ಶ್ರೀ ಎಂ.ಎಚ್. ಚಬ್ಬಿ ಇವರ ಪದೋನ್ನತಿಯಿಂದ ತೆರವಾದ ಕಾನೂನು ಅಧಿಕಾರಿ (ಕಿರಿಯ), ಎಸ್.ಪಿ. ಕಛೇರಿ, ಹಾವೇರಿ ಇಲ್ಲಿನ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೋಲೀಸ್ ಸೇವೆಗಳು–ಬಿ).

**PR-609**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಆಕುಕ 305 ಪಿಐಎಂ 2015, ಬೆಂಗಳೂರು, ದಿನಾಂಕ : 11–06–2015**

ಆಯುಷ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಈ ಕೆಳಕಂಡ ವೈದ್ಯರುಗಳು ಅವರ ಹೆಸರಿನ ಮುಂದೆ ನಮೂದಿಸಲಾದ ದಿನಾಂಕದಂದು ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ 5(1) (ಎ)ರನ್ವಯ ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸಿದೆ.

| ಕ್ರಮ ಸಂಖ್ಯೆ | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸಿರುವ ದಿನಾಂಕ |
|---|---|---|
| 1 | ಡಾ॥ ರೂಪಾದೇವಿ ಸಿ.ವಿ.,<br>ವೈದ್ಯಾಧಿಕಾರಿ<br>ಸರ್ಕಾರಿ ಆಯುರ್ವೇದ ಆಸ್ಪತ್ರೆ, ಉಂಡವಾಡಿ ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ | 20–5–2015 |
| 2 | ಡಾ॥ ವೇದಾ ಎಸ್.ಎಂ.<br>ವೈದ್ಯಾಧಿಕಾರಿ<br>ಸರ್ಕಾರಿ ಆಯುರ್ವೇದ ಆಸ್ಪತ್ರೆ, ಉಂಡವಾಡಿ ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ | 20–5–2015 |
| 3 | ಡಾ॥ ಇಂದಿರಾ ಎಂ.,<br>ವೈದ್ಯಾಧಿಕಾರಿ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಜಾಬಗೆರೆ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ | 20–5–2015 |
| 4 | ಡಾ॥ ಅಮೃತ್ ಆನಂದ<br>ವೈದ್ಯಾಧಿಕಾರಿ<br>ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಮುತ್ತಲವಾಡಿ, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ | 20–5–2015 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾ.ವೈ.ಪ. ಮತ್ತು ಸಮನ್ವಯ)

**PR-610**

**SC-100**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.